# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ : **1090**

ಸದಸ್ಯರ ಹೆಸರು : **ಶ್ರೀ. ಕವಟಗಿಮಠ ಮಹಾಂತೇಶ ಮಲ್ಲಿಕಾರ್ಜುನ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ)**

ಉತ್ತರಿಸುವ ದಿನಾಂಕ : **೨೧/೦೯/೨೦೨೦**

ಉತ್ತರಿಸುವ ಸಚಿವರು : **ಪೌರಾಡಳಿತ ಹಾಗೂ ತೋಟಗಾರಿಕೆ ಮತ್ತು ರೇಷ್ಮೆ ಸಚಿವರು**

| | ಪ್ರಶ್ನೆ | ಉತ್ತರ |
|---|---|---|
| ಅ | ರಾಜ್ಯದಲ್ಲಿ 2011 ರ ಜನಗಣತಿ ಆಧಾರದ ಮೇಲೆ 20,000 ದಿಂದ 25,000 ಜನಸಂಖ್ಯೆಯಿರುವ ಗ್ರಾಮ ಪಂಚಾಯಿತಿಗಳನ್ನು ಪಟ್ಟಣ ಪಂಚಾಯಿತಿಗಳನ್ನಾಗಿ ಮೇಲ್ದರ್ಜೆಗೇರಿಸಬೇಕೆಂದು ನಿಯಮವಿದ್ದು, ಇದನ್ನು ಅನುಷ್ಠಾನಗೊಳಿಸಲಾಗಿದೆಯೇ; | ಗ್ರಾಮ ಪಂಚಾಯಿತಿಗಳನ್ನು ಪಟ್ಟಣ ಪಂಚಾಯಿತಿಯನ್ನಾಗಿ ಮೇಲ್ದರ್ಜೆಗೇರಿಸಲು ಕರ್ನಾಟಕ ಪುರಸಭೆ ಅಧಿನಿಯಮ 1964 ಕಲಂ 349 ರನ್ವಯ ಈ ಕೆಳಕಂಡ ಮಾನದಂಡಗಳನ್ನು ಅನುಸರಿಸಲಾಗುತ್ತದೆ:<br>• ಗ್ರಾಮ ಪಂಚಾಯಿತಿ ಪ್ರದೇಶದ ಜನಸಂಖ್ಯೆಯು 10,000ಕ್ಕೆ ಕಡಿಮೆ ಇಲ್ಲದಂತೆ ಹಾಗೂ 20,000ಕ್ಕೆ ಹೆಚ್ಚಿಲ್ಲದಂತಿರಬೇಕು.<br>• ಅಂತಹ ಪ್ರದೇಶದ ಜನಸಂಖ್ಯೆಯ ಜನಸಾಂದ್ರತೆಯು ಆ ಪ್ರದೇಶದ ಒಂದು ಚ.ಕಿ.ಮೀ ವಿಸ್ತೀರ್ಣಕ್ಕೆ 400 ಕ್ಕಿಂತ ಕಡಿಮೆ ಇಲ್ಲದಿರುವುದು.<br>• ಕೃಷಿಯೇತರ ಚಟುವಟಿಕೆಗಳಲ್ಲಿನ ಉದ್ಯೋಗಾವಕಾಶಗಳ ಶೇಕಡಾವಾರು ಪ್ರಮಾಣವು ಒಟ್ಟು ಉದ್ಯೋಗದ ಪ್ರಮಾಣಕ್ಕಿಂತ 50% ಕ್ಕಿಂತ ಕಡಿಮೆ ಇಲ್ಲದಿರುವುದು.<br>ದಿನಾಂಕ:19.03.2015 ರಂದು ನಡೆದ ಸಚಿವ ಸಂಪುಟ ಸಭೆಯಲ್ಲಿ 2011 ರ ಜನಗಣತಿಯನುಸಾರ 15,000ಕ್ಕಿಂತ ಹೆಚ್ಚು ಜನಸಂಖ್ಯೆ ಹೊಂದಿರುವ ಗ್ರಾಮಪಂಚಾಯತಿಗಳನ್ನು ಮಾತ್ರ ಪಟ್ಟಣ ಪಂಚಾಯಿತಿಯನ್ನಾಗಿ ಮೇಲ್ದರ್ಜೆಗೇರಿಸಲು ನಿರ್ಣಯಿಸಲಾಗಿರುತ್ತದೆ. |
| ಆ | ಬೆಳಗಾವಿ ಜಿಲ್ಲೆಯ ಮಚ್ಚೆ ಮತ್ತು ಪೀರನವಾಡಿ ಗ್ರಾಮ ಪಂಚಾಯಿತಿಗಳು ಸುಮಾರು 30,000 ಕ್ಕಿಂತಲೂ ಹೆಚ್ಚಿನ ಜನಸಂಖ್ಯೆ ಹೊಂದಿದ್ದು, ಬೆಳಗಾವಿ ಪಟ್ಟಣದ ಅಂಚಿನಲ್ಲಿಯೇ ಇದ್ದು, ಇವುಗಳನ್ನು ಪುರಸಭೆಗಳನ್ನಾಗಿ ಮೇಲ್ದರ್ಜೆಗೇರಿಸದೇ ಮಹಾನಗರ ಪಾಲಿಕೆಗೂ ಸೇರಿಸಿಕೊಳ್ಳದೇ ಯಥಾಸ್ಥಿತಿಯಲ್ಲಿಟ್ಟಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿದೆ.<br>ಅಧಿಸೂಚನೆ ಸಂಖ್ಯೆ:ನಅಇ 50 ಎಂಎಲ್ಆರ್ 2019; ದಿನಾಂಕ:02/12/2020 ರಲ್ಲಿ ಮಚ್ಚೆ ಗ್ರಾಮ ಪಂಚಾಯಿತಿಯನ್ನು ಪಟ್ಟಣ ಪಂಚಾಯಿತಿಯನ್ನಾಗಿ ಮೇಲ್ದರ್ಜೆಗೇರಿಸಲು ಉದ್ದೇಶಿಸಿ ಪ್ರಾಥಮಿಕ ಅಧಿಸೂಚನೆ ಹೊರಡಿಸಲಾಗಿದೆ.<br>ಅಧಿಸೂಚನೆ ಸಂಖ್ಯೆ:ನಅಇ 50 ಎಂಎಲ್ಆರ್ 2019; ದಿನಾಂಕ:02/12/2020 ರಲ್ಲಿ ಪೀರನವಾಡಿ ಗ್ರಾಮ ಪಂಚಾಯಿತಿಯನ್ನು ಪಟ್ಟಣ ಪಂಚಾಯಿತಿಯನ್ನಾಗಿ ಮೇಲ್ದರ್ಜೆಗೇರಿಸಲು ಉದ್ದೇಶಿಸಿ ಪ್ರಾಥಮಿಕ ಅಧಿಸೂಚನೆ ಹೊರಡಿಸಲಾಗಿದೆ. |

| ಇ | ಇದರಿಂದಾಗಿ ಸದರಿ ಪಂಚಾಯತ್ ವ್ಯಾಪ್ತಿಗಳಲ್ಲಿ ಯಾವುದೇ ಅಭಿವೃದ್ಧಿ ಕಾರ್ಯಗಳಾಗದೇ ಜನರು ಸಮಸ್ಯೆಗಳನ್ನೆದುರಿಸುತ್ತಿರುವ ಬಗ್ಗೆ ಸರ್ಕಾರ ಗಮನಿಸಿದೆಯೇ; | ಅನ್ವಯಿಸುವುದಿಲ್ಲ. |
|---|---|---|
| ಈ | ಹಾಗಿದ್ದಲ್ಲಿ, ಇದನ್ನು ಸರಿಪಡಿಸಲು ಯಾವ ಕ್ರಮ ಜರುಗಿಸಲಾಗಿದೆ? | ಅನ್ವಯಿಸುವುದಿಲ್ಲ. |

**ಸಂಖ್ಯೆ:ನಅಇ 37 ಎಲ್‌ಸಿಕ್ಯೂ 2020.**

(ನಾರಾಯಣ ಗೌಡ)
**ಪೌರಾಡಳಿತ ಹಾಗೂ ತೋಟಗಾರಿಕೆ ಮತ್ತು ರೇಷ್ಮೆ ಸಚಿವರು**